# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 548 |
| ಸದಸ್ಯರ ಹೆಸರು | : | ಶ್ರೀಮತಿ ಭಾರತಿ ಶೆಟ್ಟಿ |
| ಉತ್ತರಿಸಬೇಕಾದ ದಿನಾಂಕ: | : | 16.12.2021 |
| ಉತ್ತರಿಸಬೇಕಾದ ಸಚಿವರು | : | ಮುಖ್ಯಮಂತ್ರಿ |

****

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಇತ್ತೀಚೆಗೆ ಎಸಿಬಿ ದಾಳಿ ಮಾಡಿದಾಗ, ಕಂಡು ಬಂದಿರುವ ಅಕ್ರಮಗಳು ಹಾಗೂ ಪ್ರಕರಣಗಳೆಷ್ಟು; (ವಿವರ ಒದಗಿಸುವುದು) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ (ಬಿ.ಡಿ.ಎ) ಕೇಂದ್ರ ಕಛೇರಿಯಲ್ಲಿನ ಅಧಿಕಾರಿ ಮತ್ತು ಸಿಬ್ಬಂದಿ ಸರ್ಕಾರಿ ಕೆಲಸ ಕಾರ್ಯಗಳಿಗಾಗಿ ಕಛೇರಿಗೆ ಬರುವ ಸಾರ್ವಜನಿಕರಿಂದ ನಿಯಮಾನುಸಾರ ಮಾಡಬೇಕಾದ ಸರ್ಕಾರಿ ಕೆಲಸಕ್ಕೆ ಲಂಚದ ಹಣದ ನಿರೀಕ್ಷೆಯನ್ನಿಟ್ಟುಕೊಂಡು ಖಾಸಗಿ ಮಧ್ಯವರ್ತಿಗಳ ಸಹಾಯದಿಂದ ಅಕ್ರಮವಾಗಿ ಲಂಚದ ಹಣವನ್ನು ಪಡೆಯುತ್ತಿರುವ ಬಗ್ಗೆ ಮತ್ತು ಬಿ.ಡಿ.ಎ. ಯಿಂದ ಸಾರ್ವಜನಿಕರಿಗೆ ವಿವಿಧ ಬಡಾವಣೆಗಳನ್ನು ನಿರ್ಮಾಣ ಮಾಡಿ ಸೈಟು ಹಂಚಿಕೆಯಲ್ಲಿ ಆಗುತ್ತಿರುವ ವ್ಯಾಪಕ ಭ್ರಷ್ಟಾಚಾರದ ಕುರಿತಂತೆ ಸಾರ್ವಜನಿಕರಿಂದ ಬಂದ ಮಾಹಿತಿ ಮೇರೆಗೆ ಭ್ರಷ್ಟಾಚಾರ ನಿಗ್ರಹ ದಳದ ಬೆಂಗಳೂರು ನಗರ ಠಾಣೆಯಲ್ಲಿ ದಿನಾಂಕ 19.11.2021 ರಂದು ಮೊಕದ್ದಮ್ಮೆ ಸಂಖ್ಯೆ 55/2021 ಕಲಂ 7(ಎ), 7(ಬಿ), 8, 12, 13(1)(ಎ) ರ/ವಿ 13(2) ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988 ರನ್ವಯ ಸ್ವಯಂ ಪ್ರೇರಿತ ಪ್ರಕರಣ ದಾಖಲಿಸಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕೇಂದ್ರ ಕಛೇರಿಯ ಮೇಲೆ ಭ್ರಷ್ಟಾಚಾರ ನಿಗ್ರಹ ದಳದ ಮೂವರು ಪೊಲೀಸ್ ಅಧೀಕ್ಷಕರನ್ನೊಳಗೊಂಡಂತೆ ವಿವಿಧ ತಂಡಗಳಿಂದ ಕಛೇರಿ ಶೋಧನೆಯನ್ನು ನಡೆಸಲಾಗಿರುತ್ತದೆ.<br><br>ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಛೇರಿಯಲ್ಲಿ ಶೋಧನೆ ನಡೆಸಲಾಗಿ, ಶೋಧನಾ ಕಾಲದಲ್ಲಿ ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಕೆಳಕಂಡಂತೆ ಅಕ್ರಮವೆಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.<br><br>• ಶೋಧನೆಯ ಸಮಯದಲ್ಲಿ ಬೆಂಗಳೂರು ನಗರದಲ್ಲಿ ಬಿ.ಡಿ.ಎ. ಯಿಂದ ನಿರ್ಮಾಣವಾಗುತ್ತಿರುವ ಕೆಲವು ಬಡಾವಣೆಗಳಲ್ಲಿ ಅರ್ಹತೆ ಇಲ್ಲದಿದ್ದರೂ ಸಹ ನಿವೇಶನಗಳನ್ನು ಹಂಚಿಕೆ ಮಾಡಿರುವುದು.<br>• ಒಂದೇ ನಿವೇಶನವನ್ನು ಹಲವರಿಗೆ ಹಂಚಿಕೆ ಮಾಡಿರುವುದು.<br>• ಬದಲಿ ನಿವೇಶನಗಳನ್ನು ಕಾನೂನು ಬಾಹಿರವಾಗಿ ಹಂಚಿಕೆ ಮಾಡಿರುವುದು.<br>• ದಾಖಲಾತಿಗಳನ್ನು ತಿದ್ದಿ ಅಕ್ರಮ ಎಸಗಿರುವುದು. |

| | | |
|---|---|---|
| | | • ಸಿ.ಎ. ನಿವೇಶನಗಳನ್ನು ಹಾಗೂ ಮೂಲೆ ನಿವೇಶನಗಳನ್ನು ಹಂಚಿಕೆ ನಿಯಮ ಉಲ್ಲಂಘನೆ ಮಾಡಿ ಅವ್ಯವಹಾರ ಎಸಗಿರುವುದು.<br>• ಬಿ.ಡಿ.ಎ. ಅಧಿಕಾರಿ / ಸಿಬ್ಬಂದಿಗಳು ಪ್ರಾಧಿಕಾರದ ನಿಯಮಗಳನ್ನು ಪಾಲಿಸದೇ ಕೆಲವು ಖಾಸಗಿ ಸಂಘದವರೊಂದಿಗೆ ಶಾಮೀಲಾಗಿ ಸಂಘದವರಿಗೆ ಅಕ್ರಮವಾಗಿ ಲಾಭ ಗಳಿಸಲು ಅನುಕೂಲ ಮಾಡಿಕೊಟ್ಟಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಪ್ರಕರಣಕ್ಕೆ ಸಂಬಂಧಿಸಿದಂತೆ ಶೋಧನೆಯ ವೇಳೆಯಲ್ಲಿ ಕೆಲವೊಂದು ದಾಖಲಾತಿಗಳನ್ನು ಅಮಾನತ್ತುಪಡಿಸಿಕೊಳ್ಳಲಾಗಿದೆ. ತನಿಖೆ ಮತ್ತು ದಾಖಲಾತಿಗಳ ಪರಿಶೀಲನಾ ಕಾರ್ಯ ಮುಂದುವರೆದಿದೆ.<br>• ಬಿ.ಡಿ.ಎ. ಕಛೇರಿಯಲ್ಲಿ ಅಮಾನತ್ತುಪಡಿಸಿಕೊಂಡ ದಾಖಲಾತಿಗಳ ಪರಿಶೀಲನೆಯಲ್ಲಿ ಕೆಲವೊಂದು ಅಧಿಕಾರಿಗಳು ಸೈಟು ಹಂಚಿಕೆಯಲ್ಲಿ ಅವ್ಯವಹಾರ ಎಸಗಿರುವುದು ಕಂಡುಬಂದ ಹಿನ್ನೆಲೆಯಲ್ಲಿ ಅವರುಗಳ ವಿರುದ್ಧ ತನಿಖೆ , ವಿಚಾರಣೆ ನಡೆಸುವ ಕುರಿತು ಭ್ರಷ್ಟಾಚಾರ ನಿಗ್ರಹ ದಳದಿಂದ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988 ರ ರೀತ್ಯಾ ಸರ್ಕಾರದ ಪೂರ್ವಾನುಮತಿ ಕೋರಲಾಗಿದೆ.<br>• ಪೂರ್ವಾನುಮತಿ ಕೋರಿರುವ ಪ್ರಕರಣಗಳಿಗೆ ಸಂಬಂಧಿಸಿದ ದೂರಿನ ಅಂಶಗಳನ್ನು ಪರಿಶೀಲಿಸಿ ಆರೋಪಿತ ಅಧಿಕಾರಿ / ನೌಕರರ ವಿರುದ್ಧ ತನಿಖೆ ಜರುಗಿಸಲು ಪ್ರಕರಣವನ್ನು ಭ್ರಷ್ಟಾಚಾರ ನಿಗ್ರಹ ದಳಕ್ಕೆ ವಹಿಸುವ ಬಗ್ಗೆ ಸ್ಪಷ್ಟವಾದ ಅಭಿಪ್ರಾಯದೊಂದಿಗೆ ವರದಿ ಸಲ್ಲಿಸುವಂತೆ ನಗರಾಭಿವೃದ್ಧಿ ಇಲಾಖೆಯಿಂದ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರನ್ನು ಕೋರಲಾಗಿದೆ. |
| (ಆ) | ಬಿಡಿಎ ನಲ್ಲಿ ಈ ರೀತಿಯ ಅಕ್ರಮಗಳು ಎಂದಿನಿಂದ ಜರುಗುತ್ತಿವೆ; ಈ ಬಗ್ಗೆ ಸರ್ಕಾರ ಯಾವ ರೀತಿಯ ತನಿಖೆ ಕೈಗೊಳ್ಳುತ್ತದೆ; | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವಿಶೇಷ ಕಾರ್ಯನಿರತಪಡೆ ಮತ್ತು ಜಾಗೃತದಳವು ಸೃಜನೆಯಾದ 1990ನೇ ಸಾಲಿನಿಂದ ಪ್ರಾಧಿಕಾರದ ಆಸ್ತಿಗೆ ಸಂಬಂಧಪಟ್ಟಂತೆ ನಕಲಿ ದಾಖಲಾತಿಗಳನ್ನು ಸೃಷ್ಟಿಸಿ, ಅಕ್ರಮವಾಗಿ ನಿವೇಶನಗಳ ಹಂಚಿಕೆ ಪಡೆದು ಮೋಸ, ವಂಚನೆ ಮಾಡುವ, ಪ್ರಾಧಿಕಾರದ ಅಧಿಕೃತ ದಾಖಲಾತಿಗಳನ್ನು ತಿದ್ದುವಂತಹ ಮತ್ತು ದುರುಪಯೋಗ ಪಡಿಸಿಕೊಳ್ಳುವಂತಹ, ಅಕ್ರಮ ಕೃತ್ಯಗಳ ಬಗ್ಗೆ ಕಾಲಕಾಲಕ್ಕೆ ವಿಚಾರಣೆ ಕೈಗೊಂಡು, ತಪ್ಪಿತಸ್ಥರ ವಿರುದ್ಧ ಸ್ಥಳೀಯ ಪೊಲೀಸ್ ಠಾಣೆ/ಬಿಎಂಟಿಎಫ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಪ್ರಕರಣಗಳನ್ನು ದಾಖಲಿಸಲಾಗುತ್ತಿರುತ್ತದೆ. ಈ ಪೈಕಿ ಹಲವು ಪ್ರಕರಣಗಳು ತನಿಖೆಯಲ್ಲಿದ್ದು, ಇನ್ನೂ ಹಲವಾರು ಪ್ರಕರಣಗಳು ಮಾನ್ಯ ನ್ಯಾಯಾಲಯದ ವಿಚಾರಣೆಯಲ್ಲಿರುತ್ತದೆ. ತಪ್ಪಿತಸ್ಥ ಪ್ರಾಧಿಕಾರದ ಅಧಿಕಾರಿ/ ನೌಕರರ ವಿರುದ್ಧ ಪ್ರಾಧಿಕಾರದಿಂದ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ. |

<table>
<tr><td>(ಇ)</td><td>ಬಿಡಿಎ ನಲ್ಲಿ ನಡೆಯುತ್ತಿರುವ ಅಕ್ರಮಗಳಿಗೆ ಪ್ರಮುಖ ಸೂತ್ರಧಾರಿಗಳಾಗಿರುವ ಬಿಡಿಎ ಯಿಂದ ಹೊರಗಿನವರನ್ನು ಗುರುತಿಸಲು ಕೈಗೊಳ್ಳುವ ಕ್ರಮಗಳೇನು:</td><td rowspan="2">ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಮಧ್ಯವರ್ತಿಗಳು/ ಬ್ರೋಕರ್‌ಗಳ ಪ್ರವೇಶವನ್ನು ನಿರ್ಬಂಧಿಸಲಾಗಿರುತ್ತದೆ. ಬಿಡಿಎ ನಲ್ಲಿ ನಡೆಯುತ್ತಿರುವ ಅಕ್ರಮಗಳಿಗೆ ಸಂಬಂಧಪಟ್ಟಂತೆ ವಿಚಾರಣೆ ನಡೆಸಿ. ಸದರಿ ಅಕ್ರಮಗಳಲ್ಲಿ ಭಾಗಿಯಾಗಿರುವ ಪ್ರಾಧಿಕಾರದ ಅಧಿಕಾರಿ/ ನೌಕರರೊಂದಿಗೆ ಶಾಮಿಲಾಗಿರುವ ಮಧ್ಯವರ್ತಿಗಳ/ಸೂತ್ರಧಾರಿ ವ್ಯಕ್ತಿಗಳ ವಿರುದ್ಧ ಸ್ಥಳೀಯ ಪೊಲೀಸ್ ಠಾಣೆ/ ಬಿಎಂಟಿಎಫ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಪ್ರಕರಣ ದಾಖಲಿಸಿ ಪ್ರಾಧಿಕಾರದಿಂದ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.</td></tr>
<tr><td>(ಈ)</td><td>ಸದರಿ ವ್ಯಕ್ತಿಗಳು ಸರ್ಕಾರಕ್ಕಿಂತ ಬಲಶಾಲಿಗಳೆಂದು ತೋರ್ಪಡಿಸಿಕೊಂಡು ಬಹುಕೋಟಿ ಹಗರಣಗಳನ್ನು ಹೊರತರಲು ಸರ್ಕಾರದ ಕ್ರಮಗಳೇನು?</td></tr>
</table>

ನಅಇ 266 ಬೆಂಆಸೇ 2021

(ಬಸವರಾಜ ಬೊಮ್ಮಾಯಿ)

ಮುಖ್ಯಮಂತ್ರಿ